ಡಾ॥ ಜಿ. ವಿ. ಕಲ್ಲಾಪುರ *

# ಕೆಳದಿ ವೀರಭದ್ರನಾಯಕನ ಅಪ್ರಕಟಿತ ಶಾಸನ

ಪ್ರಸ್ತುತ ಪ್ರಬಂಧದಲ್ಲಿ ತಾಳೆಯೋಲೆ ಗ್ರಂಥವೊಂದರಲ್ಲಿ ಪ್ರತಿ ಮಾಡಲ್ಪಟ್ಟಿರುವ ಶಾಲಿವಾಹನ ಶಕ ೧೫೫೬ ಕ್ಕೆ ಸಂಬಂಧಿಸಿದ, ಕೆಳದಿ ವೀರಭದ್ರವಾಯಕನ ಅಪ್ರಕಟಿತ ಶಾಸನವನ್ನು ಮೂಲ ಪಾಠದೊಂದಿಗೆ ಪರಿಚಯಿಸಲಾಗಿದೆ.

ಶಾಸನವು ತಾಳೆಯೋಲೆಯಲ್ಲಿ ಪ್ರತಿಮಾಡಲ್ಪಟ್ಟಿದ್ದು, ಶಿವಮೊಗ್ಗದ ಮಲ್ನಾಡ್ ರೀಸರ್ಚ್ ಅಕಾಡೆಮಿ (ರಿ) ಯಲ್ಲಿದೆ. ಕನ್ನಡ ಭಾಷೆಯಲ್ಲಿರುವ ಈ ಶಾಸನವನ್ನು ನಾಗರಿ ಹಾಗೂ ತಿಗಳಾರಿ ಲಿಪಿಯಲ್ಲಿ ಬರೆಯಲಾಗಿದೆ. ಶಾಸನವನ್ನು ಎರಡು ಗರಿಗಳಲ್ಲಿ ಬರೆಯಲಾಗಿದ್ದು, ಇದರ ಅಳತೆ ೩೬.೫×೫.೫ ಸೆಂ.ಮೀ. ಆಗಿದ್ದು, ಒಟ್ಟು ಹದಿನೆಂಟು ಸಾಲುಗಳಿಂದ ಕೂಡಿದೆ. ಮೊದಲನೇ ಗರಿಯ ಮುಂಭಾಗದಲ್ಲಿ ಹತ್ತು ಸಾಲುಗಳು, ಹಿಂಬದಿಯಲ್ಲಿ ಐದು ಸಾಲುಗಳು ಹಾಗೂ ಎರಡನೇ ಗರಿಯ ಮುಂಭಾಗದಲ್ಲಿ ಮೂರು ಸಾಲುಗಳಲ್ಲಿ ಬರೆಯಲಾಗಿದೆ. ಪ್ರತೀ ಸಾಲಿನಲ್ಲಿ ಐವತ್ತೇಳು ಅಕ್ಷರಗಳಿವೆ. ತಾಳೆಯೋಲೆಯು ಉತ್ತಮ ಸ್ಥಿತಿಯಲ್ಲಿದೆ. ಕೊಡಚಾದ್ರಿಯಲ್ಲಿರುವ ಭದ್ರಕಾಳಿ ದೇವಾಲಯಕ್ಕೆ ಸಂಬಂಧಿಸಿದ ಶಾಸನವಾಗಿದ್ದು ಅದರ ವಿವರಗಳನ್ನು ಇಲ್ಲಿ ಕೊಡಲಾಗಿದೆ.

**ಶಾಸನ ಪಾಠ**

**ಮೊದಲನೆ ಗರಿ ಮುಂಭಾಗ ( ನಾಗರಿ ಲಿಪಿಯಲ್ಲಿದೆ )**

೧. ಸ್ವಸ್ತಿ ನಿರ್ವಿಘ್ನಮಸ್ತು। ನಮಸ್ತುಂಗ ಶಿರಶ್ಚುಂಬೀ ಚಂದ್ರಚಾಮರ ಚಾರವೇ। ತ್ರೈಲೋಕ್ಯನಗರಾರಂಭ ಮೂಲಸ್ತಂಭಾಯ ಶಂಭುವೆ। ಸ್ವಸ್ತಿಶ್ರೀ ಜಯಾಭ್ಯುದಯ ನೃಪ ಶಾಲಿವಾಹನ

೨. ಶಕ ವರ್ಷ ೧೫೫೬ ನೇ ಪರಿವರ್ತಮಾನಕ್ಕೆ ಸಲುವ ತಾರಣ ಸಂವತ್ಸರದ ॥ ಮಾಘ ಬ ೧೩ ಲು ಯಡವ ಮುರಾರೀ ಕೋಟೆಕೋಲಾಹಲ ವಿಶುದ್ಧವೈಧಿಕಸಿದ್ಧಾಂತ ಪ್ರತಿಷ್ಟಾಪಕ.

೩. ಶಿವಗುರು ಭಕ್ತಿಪರಾಯಣರಾದ। ಇಕ್ಕೇರೀ ವೀರಭದ್ರಪನಾಯಕರು।-। ಕೋಡಚಾದ್ರಿ ಕೇಶೋಭಟ್ಟರಿಗೆ ಶ್ರೀಮಧಿಕ್ಕೇರೀ ಅಘೋರವೀರಭದ್ರ ಸಮೇತ ಭದ್ರಕಾಲ ಅಂಮನವ

೪. ರ ಪೂಜೆಯಂನು ।ಕಾಲಂಪ್ರತೀಯಲ್ಲಿ ಪುತ್ರಪೌತ್ರ ರಾಶಾಂಕರಾಗಿ ನಿತ್ಯ ನೈಮಿತ್ಯ ವಿಶೇಷಕಟ್ಟಲೇ ಹಂಣ್ಣು ಕಾಯಿದುರ್ಗಾಕಲಶವಸ್ತ್ರ ಪ್ರಯುಮೆ ಪಂ

೫. ಚಾಂಮ್ರುತ ಕನಕಾಭಿಷೇಕ ಸುವರ್ನಪುಷ್ಪ ಮುಂತಾದಂನೂ ಕಾಲಂಪ್ರತೀಯಲ್ಲಿ ತ್ಯಗದು ಕೊಂಡು।-। ದೇವಸ್ಥಾನದ ದಕ್ಷಿಣ ದಿಕ್ಕಿನಲ್ಲಿ ಅಘೊ.

೬. ರ ವೀರಭದ್ರದೇವರ ಅರ್ಚಕಮಧುಲಿಂಗಾಭಟ್ಟನ ಮನೆ ಹಿತ್ತಲ ದಕ್ಷಿಣದಿಕ್ಕಿನಲ್ಲೀ ಇರುವಮನೆ ದಣಾ ಹಿತ್ತಿಲೀಗೇ ಚತುರ್ಗಡೀ। ಮುಡಲುಗೇ

೭. ಮೇಕೇರೆದಿಣವೇಗಡೀ। ತೆಂಕಲು ಸತೀಚತುರ್ಗಡೀವಲಗಾದ ಸ್ಥಲದಲ್ಲಿ ಮನೆ ಕಟ್ಟಿ ಕೊಂಡು ಅನುಭವಿಸಿ ಬಂನಿಯನುತ ಧಾರಾಪೂರ್ವಕವಾ

೮. ಗಿ ಪ್ರಾಕು ಸದಾಶಿವಪನಾಯಕರು ಬಿಟ್ಟದರಿಂದಾ,

*ಒಂದನೇ ಅಡ್ಡರಸ್ತೆ, ಜಯನಗರ, ಶಿವಮೊಗ್ಗ ೫೭೭೨೦೧

ನೀವು ಭದ್ರಕಾಲೀ ಅಂಮನವರ ಕಲಾಪೂರ್ವಕವಾಗಿ ಪೂಜೆಯಂನು। ನಾವು ಬೇಡಿಕೊಂಡ

೯. ಪ್ರಸಾದವು ಆದ್ದರಿಂದ ಬಹಲ ಸಂತೋಷಬಿಟ್ಟು ಸಮರ್ಥರುಯನುತತಿಳಿದು ಆಗಲೇ।-।ಸದಾಶಿವಪನಾಯಕರ ಪ್ರಪೌತ್ರರಾದಭದ್ರಪನಾಯಕರ ಪೌತ್ರರಾದ ವೆಂ

**ಹಿಂಭಾಗ**

೧೦. ಕಟಪನಾಯಕರ ಪುತ್ರರಾದ ವೀರಭದ್ರ ಪನಾಯಕರು।-।ಸುಭಾಭಟ್ಟರ ಪ್ರಪೌತ್ರರಾದ ಕೇಶೋಭಟ್ಟರ ಪೌತ್ರರಾದ ಮೊದೋಭಟ್ಟರ ಪುತ್ರರಾದ ಕೇಶೋಭಟ್ಟರೀಗೇ ಅಪಣೆದಯಾಪಾ

೧೧. ಲಿಸಿದು। ಈ ಭದ್ರಕಾಲೀ ಅಂಮನವರ ಸಂನಿಧಿಯಲು ಯೇನು ಉತ್ಸಾಹ ನಿತ್ಯ ನೈಮಿತ್ಯಕ ಕಟ್ಟಲೆಯನು ಉತ್ಸಾಹವಂನು ಮೇಲಿನ ಮನೆ ದಣಾಮುಂತಾಗಿ ನಿಂಮ ಪುತ್ರ

೧೨. ಪ್ರಪೌತ್ರ ಸಂತಾನ ಪಾರಂಪರ್ಯ್ಯವಾಗಿ ಈ ಸ್ಥಲವಂನು ಅನುಭವಿಸಿಕೊಂಡುಬಂನೀಯನುತ ಶ್ರೀಅಘೋರ ವೀರಭದ್ರ ಸಮೇತ ಭದ್ರಕಾಲೀ ಅಂಮನವರ ಸಂನಿಧೀಲು ಶ್ರೀಗಲ ಸ್ತ್ರೀ

೧೩. ಬೆಲ್ವಪತ್ರೆನೀರಂನು ಬಿಟ್ಟೆವು। ಇದಕೆ ಅಲ್ಪಿದರೆ ಸೂರ್ಯ ಚಂದ್ರ ಭೊಮೀ ಸ್ತ್ರೀ ಮನ್ಮಹಾ ವಿಷ್ಣು ಮಹೇಶ್ವರರೀಗೇ ಅಲ್ಪಿದಪಾಪವನು ಅನುಭವಿಸಿಕೊಂಡು ಬಂ

೧೪. ದೇವುಯನುತ ನಂಮ ಸಂತಾನಾ ಪಾರಂಪರ್ಯ್ಯ ವಾಗಿ ಪುಣ್ಯಬರಬೇಕೆಂದು ಸಹಿರಂಣ್ಯೋದಕ ಧಾರಾಪೂರ್ವಕ ವಾಗಿ ಸ್ತ್ರೀ ತುಲಸೀಬಿಲ್ವ ಪ

೧೫. ತ್ರೆ ನೀರಂನು ಬಿಟ್ಟೆವು।-। ದಾನಾಚ ಪಾಲಿತೋ ರಾಜಾ ದಾನಾಚ್ಚಪಾಲಿತೇಗುರು ದದಾನಾಚಪಾಲಿತೇ ಮಾತಾ ತತ್ಫಲಂಲಭತೇಮಹೀ: ಯಥಾವಾಲೇಪ್ರತಿ:

**ಎರಡನೇ ಗರಿ ( ತಿಗಳಾರಿ ಲಿಪಿಯಲ್ಲಿದೆ )**

೧. ಸವಸ್ತಿ। ಕೋಡಚಾದ್ರೀಸುಭಾಬಟ್ಟರಮಗ ಕೇಶೋಭಟ್ಟರ ಪುತ್ರ ಮಾದೋಬಟ್ಟರ ಮಗ ಕೇಶೋಭಟ್ಟರೀ।-।ಶಕವರ್ಷ ೧೫೦೭ ನೇ ಪರಿವರ್ತಮಾನಕ್ಕೆ ಸಲುವ ತಾರಣ ಸಂ । ಮಾಘ

೨. ಬ ೧೩ಲು ಭದ್ರಕಾಲೀ ಅಂಮನವರ ಪೂಜೆಯನ್ನು ವೀರಭದ್ರನಾಯಕರು ಕೊಟ್ಟರು ಅವರ ಮಗ ಸುಬಾಭಟ್ಟರಮಗ ಮಾದೋಭಟ್ಟರ ಪುತ್ರ ಕೇಶೋ ಭಟ್ಟರ ಪುತ್ರ ಸುಬಾಭಟ್ಟ ತ

೩. ಮ ಮಾದೋಭಟ್ಟರ ಮಗ ಮದುಲಿಂಗಭಟ್ಟ ಯಾನೇ ತಂಮ್ಮಯಭಟ್ಟನ ಬರಹ

ಶಾಲಿವಾಹನ ಶಕ ವರ್ಷ ೧೫೦೭ ನೇ ತಾರಣಸಂವತ್ಸರದಲ್ಲಿ ಕೆಳದಿ ವೀರಭದ್ರನಾಯಕರು ಕೊಡಚಾದ್ರಿಯಲ್ಲಿರುವ ಭದ್ರಕಾಲೀ ಅಮ್ಮನವರ ನಿತ್ಯನೈಮಿತ್ತಿಕ ಪೂಜಾದಿಗಳನ್ನು ಕೂಟ್ಟ ದಾನದ ವಿವರಗಳನ್ನು ಒಳಗೊಂಡಿದೆ. ಪ್ರಸ್ತುತ ಶಾಸನದ ಕಾಲವಿಚಾರದ ಬಗ್ಗೆ ಹೇಳುವುದಾದರೆ, ವೀರಭದ್ರನಾಯಕರು ಆಳಿದ ಕಾಲ ಕ್ರಿ.ಶ.೧೬೨೯-೧೬೪೬. ಆದರೆ ಈ ಶಾಸನದಕಾಲ ಕ್ರಿ.ಶ.೧೫೮೪ ಆಗುತ್ತದೆ. ಬಹುಶಃ ಇದೊಂದು ಕೂಟ ಶಾಸನವಿರಬಹುದು, ಅಥವಾ ಶಾಸನದ ಎಂಟನೇ ಸಾಲಿನಲ್ಲಿ ಹೇಳಿರುವಂತೆ ಸದಾಶಿವನಾಯಕರು ಬಿಟ್ಟ ದಾನವನ್ನು ಕೇಶೋಭಟ್ಟರು ಬೇಡಿಕೊಂಡ ಮೆರೆಗೆ ಪುನ: ದೃಢಿಕರಿಸಿರುವರೆಂದು ಹೇಳಬಹುದಾಗಿದೆ, ಈ ಶಾಸನವನ್ನು ಪ್ರತಿ ಮಾಡಿದವನು ಮಾದೋಭಟ್ಟರ ಮಗ ಮಧುಲಿಂಗ ಭಟ್ಟನೆಂದು ಆತನೇ ಶಾಸನದ ಕೊನೆಯಲ್ಲಿ ಹೇಳಿಕೊಂಡಿದ್ದಾನೆ. ○


ಗ್ರಂಥ ಋಣ

೧.ತಾಳೆಯೋಲೆ ಹಸ್ತಪ್ರತಿ-ಕೃಪೆ ಮಲ್ನಾಡ ರೀಸರ್ಚ್ ಅಕಾದೆಮಿ, ಶಿವಮೊಗ್ಗ

೨. ಕೆಳದಿ ಅರಸರ ಶಾಸನ ಸಂಪುಟ-ಡಾ.ಕೆ.ವೆಂಕಟೇಶ್.

೩. ಎಪಿಗ್ರಾಫಿಯಾ। ಕರ್ನಾಡಾಟಿಕಾ.ಸಂ.೮.(ರೈಸ್‌ಆವೃತ್ತಿ)